# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ ಜನವರಿ ೧೪, ೨೦೧೬ (ಪುಷ್ಯ ೨೪, ಶಕ ವರ್ಷ ೧೯೩೭)<br>Bengaluru, Thursday, January 14, 2016 (Pushya 24, Shaka Varsha 1937) | ಸಂಚಿಕೆ ೨<br>Issue 2 |
|---|---|---|


## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು,**

**ಸಂಖ್ಯೆ : ಕೆಎಸ್.ಎ/ಸಿಆರ್/17/08-09 ಬೆಂಗಳೂರು, ದಿನಾಂಕ: 22.09.2015.**

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

ಬೆಂಗಳೂರು ನಗರದ ಬಿ.ಬಿಎಂ.ಪಿ. ವ್ಯಾಪ್ತಿಯ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಅಂಬೇಡ್ಕರ್‌ನಗರ, ಬೇಲೂರು ನಾಗಸಂದ್ರ ಗ್ರಾಮದ ಸರ್ವೆ ನಂ. 12ರಲ್ಲಿ 4–37 ಎಕರೆ/ಗುಂಟೆ ಜಮೀನನ್ನು ಅಂಬೇಡ್ಕರ್ ಕೊಳಚೆ ಪ್ರದೇಶವೆಂದು ದಿನಾಂಕ: 05–09–2011ರ ಸಮ ಸಂಖ್ಯೆ ಅಧಿಸೂಚನೆಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಮಂಡಳಿಯ ಕಾಯ್ದೆ ಕಲಂ–3 ರಡಿ ಘೋಷಣೆಯನ್ನು ಹೊರಡಿಸಿದ್ದು, ಪ್ರಶ್ನಿತ ಅಂಬೇಡ್ಕರ್ ನಗರ ಕೊಳಚೆ ಪ್ರದೇಶವು ಬೇಲೂರು ಗ್ರಾಮದ ಸರ್ವೆ ನಂ. 12ರ ಬದಲಾಗಿ ಸರ್ವೆ ನಂ. 58/1, 58/2, 58/4, 58/5, 58/6 ರ ಒಟ್ಟು 4–08 ಎಕರೆ/ಗುಂಟೆ ವಿಸ್ತೀರ್ಣದ ಹೆಚ್.ಎ.ಎಲ್. ಮಾಲೀಕತ್ವದ ಜಮೀನಿನಲ್ಲಿರುತ್ತದೆಂದು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರು ತಮ್ಮ ಪತ್ರ ಸಂ.ಕಕೊಅಮ/ಕಂ–1/ಆರ್–2/ಚಲ್ಲಘಟ್ಟ/2015–16/108, ದಿನಾಂಕ: 06–05–2015 ರಂತೆ ವರದಿಯನ್ನು ಸಲ್ಲಿಸಿ, ಈ ಸರ್ವೆ ನಂಬರ್‌ಗಳಲ್ಲಿ ಅಸ್ಥಿತ್ವದಲ್ಲಿರುವ ಕೊಳಚೆ ಪ್ರದೇಶವನ್ನು ಮಾರತ್‌ಹಳ್ಳಿ ಗ್ರಾಮದ ಸರ್ವೆ ನಂ. 33 ರಲ್ಲಿ ನಿರ್ಮಿಸುತ್ತಿರುವ ಜಿ+3 ಮಾದರಿಯ ಮನೆಗಳಿಗೆ ಕಾಮಗಾರಿ ಪೂರ್ಣಗೊಂಡ ನಂತರ ಸ್ಥಳಾಂತರಿಸಲು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಕಲಂ 3 ರಡಿ ದಿನಾಂಕ: 05–09–2011ರ ಆದೇಶವನ್ನು ರದ್ದುಪಡಿಸಿ ಇದೇ ಕಾಯ್ದೆಯ ಕಲಂ 11 ರಡಿ ಕೊಳಚೆ ಪ್ರದೇಶವೆಂದು ಘೋಷಿಸಬೇಕೆಂದು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕಛೇರಿಯ ದಿನಾಂಕ: 05–09–2011 ರ ಮಂಡಳಿಯ ಕಾಯ್ದೆ ಕಲಂ–3 ರಡಿ ಹೊರಡಿಸಿದ ಅಧಿಸೂಚನೆಯನ್ನು ಈ ತಕ್ಷಣ ಜಾರಿಗೆ ಬರುವಂತೆ ರದ್ದುಪಡಿಸಿ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ ಎ/ಗುಂ. | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1) | ಡಾ॥ ಬಿ.ಆರ್. ಅಂಬೇಡ್ಕರ್ ಕೊಳಚೆ ಪ್ರದೇಶ, ಚಲ್ಲಘಟ್ಟ ಬೇಲೂರು ನಾಗಸಂದ್ರ ಗ್ರಾಮ, ವರ್ತೂರು ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು | ಹೆಚ್.ಎ.ಎಲ್ | 58/1<br>58/2<br>58/4<br>58/5<br>58/6 | 2–13<br>0–05.12<br>0–20.08<br>0–15.12<br>0–33.08 | ರಾಜಕಾಲುವೆ | ಸ.ನಂ. 2 & 57ರ ಜಮೀನು | ಸ.ನಂ. 58/1,2,4,6 ರ ಉಳಿಕೆ ಜಮೀನು | ಸ.ನಂ. 2, 58/5 ರ ಉಳಿಕೆ ಹಾಗೂ ಸ.ನಂ.59 ರ ಜಮೀನು |
| | | | ಒಟ್ಟು | 4–08 | | | | |

PR-110

SC-50

**ವಿ.ಶಂಕರ್**

ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು,

**ಸಂಖ್ಯೆ:ಕೆಎಸ್.ಎ/ಸಿಆರ್/82/11–12 ಬೆಂಗಳೂರು, ದಿನಾಂಕ: 30.10.2015.**

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕು, ಸಿ.ವಿ. ರಾಮನ್‌ನಗರ, ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ವರ್ತೂರು ಹೋಬಳಿ, ಭೈರಸಂದ್ರ ಗ್ರಾಮದ ಸ.ನಂ. 83 ರಲ್ಲಿ 2–30 ಎಕರೆ/ಗುಂಟೆ ಕೊಳಚೆ ಪ್ರದೇಶವನ್ನು ಮಂಡಳಿಯ ಕಾಯ್ದೆ ಕಲಂ (3) ರಡಿ ಪ್ರಾಥಮಿಕವಾಗಿ ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 26–07–2012 ರಲ್ಲಿ ಘೋಷಿಸಲಾಗಿತ್ತು. ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರು ತಮ್ಮ ಪತ್ರ ಸಂ.ಕಕೊಅಮ/ಕಂ–1/ಆರ್–2/13/ಭೈರಸಂದ್ರ/14–15/1053, ದಿ: 18–02–2015ರಂತೆ ಈ ಕಛೇರಿಗೆ ವರದಿಯನ್ನು ಸಲ್ಲಿಸಿ, ಸದರಿ ಘೋಷಿತ ಕೊಳಚೆ ಪ್ರದೇಶವು ಬಿ.ಇ.ಎಂ.ಎಲ್. ಸಂಸ್ಥೆಯ ಮಾಲೀಕತ್ವದಲ್ಲಿದ್ದು, ಸದರಿ ಘೋಷಣೆಗೆ ಬಿ.ಇ.ಎಂ.ಎಲ್. ಸಂಸ್ಥೆಯವರು ಆಕ್ಷೇಪಣೆಯನ್ನು ಸಲ್ಲಿಸಿರುತ್ತಾರೆ ಹಾಗೂ ಈ ಕೊಳಚೆ ಪ್ರದೇಶವನ್ನು ಸ್ಥಳಾಂತರಿಸಲು ಮಾರತ್‌ಹಳ್ಳಿ ಗ್ರಾಮದ ಸರ್ವೆ ನಂ. 33 ರಲ್ಲಿ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಪ್ರಗತಿ ಹಂತದಲ್ಲಿದ್ದು, 9 ತಿಂಗಳ ಕಾಲಾವಕಾಶ ಬೇಕಾಗಿರುತ್ತದೆ. ಕಾಮಗಾರಿ ಪೂರ್ಣಗೊಂಡ ನಂತರ ನಿವಾಸಿಗಳನ್ನು ಸ್ಥಳಾಂತರ ಮಾಡಲು ಕ್ರಮ ವಹಿಸಲಾಗುವುದು, ಪ್ರಯುಕ್ತ ಮಂಡಳಿಯ ಕಾಯ್ದೆಯ ಕಲಂ–11 ರಡಿ ಕೊಳಚೆ ಪ್ರದೇಶವನ್ನು ಸ್ಥಳಾಂತರಿಸಲು ಘೋಷಣೆಯನ್ನು ಹೊರಡಿಸಬೇಕೆಂದು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕಛೇರಿಯ ದಿನಾಂಕ: 26–07–2012 ರಲ್ಲಿ ಮಂಡಳಿಯ ಕಾಯ್ದೆ ಕಲಂ–3 ರಡಿ ಹೊರಡಿಸಿದ ಪ್ರಿಲಿಮಿನರಿ ಅಧಿಸೂಚನೆಯನ್ನು ಈ ತಕ್ಷಣ ಜಾರಿಗೆ ಬರುವಂತೆ ಮಾರ್ಪಾಡಿಸಿ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ

ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973 ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಪೂರ್ವ ತಾಲ್ಲೂಕು, ಸಿ.ವಿ.ರಾಮನ್‌ನಗರ, ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವರ್ತೂರು ಹೋಬಳಿ, ಭೈರಸಂದ್ರ ಗ್ರಾಮದ ಕೃಷ್ಣಪ್ಪ ಗಾರ್ಡನ್ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ ಎ/ಗುಂ. | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1) | ಕೃಷ್ಣಪ್ಪ ಗಾರ್ಡನ್ ಕೊಳಚೆ ಪ್ರದೇಶ ಭೈರಸಂದ್ರ ಗ್ರಾಮ, ವರ್ತೂರು ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು | ಬಿ.ಇ.ಎಂ.ಎಲ್ | 83 | 2–30 | ಸರ್ವೆ ನಂ. 83 ರ ಉಳಿಕೆ ಖಾಲಿ ಜಮೀನು | ಸ.ನಂ.84 | ಹಳ್ಳ | ಕಾಂಪೌಂಡ್ |

PR-113
SC-50

**ವಿ.ಶಂಕರ್**
ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಕಂಇ 46 ಭೂಸ್ವಾತು 2015 ಬೆಂಗಳೂರು, ದಿನಾಂಕ: 20.11.2015.**

ಸರ್ಕಾರದ ಅಧಿಸೂಚನೆ ಸಂ.ಕಂಇ 57 ಭೂಸ್ವಾತು 2013, ದಿನಾಂಕ: 11–06–2014ರಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಹೊನಸಿಗೆರೆ ಗ್ರಾಮದ ಸ.ನಂ. 1/1, 2/1, 3/1ಎ ರಲ್ಲಿ ಇತ್ಯಾದಿಗಳಲ್ಲಿ ಹೇಮಾವತಿ ನಾಲೆಗೆ 1 ಎಕರೆ 18 1/4 ಗುಂಟೆ ವಿಸ್ತೀರ್ಣದ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆಯನ್ನು ಹೊರಡಿಸಿ ದಿನಾಂಕ: 14–08–2014ರ ರಾಜ್ಯ ಪತ್ರದ ಭಾಗ–6ರಲ್ಲಿ ಪುಟ ಸಂಖ್ಯೆ: 536 ರಿಂದ 538ರಲ್ಲಿ ಹೊನಸಿಗೆರೆ ಗ್ರಾಮದ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂಸ್ವಾಧೀನ ಪಡಿಸಿರುವುದಾಗಿ ಪ್ರಕಟಗೊಂಡಿರುತ್ತದೆ. ಸದರಿ ಅನುಸೂಚಿಯಲ್ಲಿ ಸ.ನಂ. 1/1 ರಲ್ಲಿ 05 ಜನ ಖಾತೆದಾರರಿದ್ದು, ಆ ಪೈಕಿ ಹೆಚ್.ಎನ್. ಗಂಗಾಧರಯ್ಯ ಬಿನ್ ನಂಜುಂಡಪ್ಪ ಇವರ ಜಮೀನಿನಲ್ಲಿ 0–01 1/4 ಗುಂಟೆ ಮಾತ್ರ ಭೂಸ್ವಾಧೀನಕ್ಕೆ ಒಳಪಡುತ್ತದೆ. ಆದರೆ, ಕಲಂ 6(1)ರ ಅಧಿಸೂಚನೆಯಲ್ಲಿ ತಂತ್ರಾಂಶ ದೋಷದಿಂದಾಗಿ 5 ಜನ ಖಾತೆದಾರರ ಹೆಸರು ಸೇರ್ಪಡೆಗೊಂಡಿದೆ. ಆದ್ದರಿಂದ, 6(1)ರ ಪ್ರಕಟವಾದ ಅಧಿಸೂಚನೆಯಲ್ಲಿ ಸ.ನಂ. 1/1 ರಲ್ಲಿ ಕ್ರಮ ಸಂಖ್ಯೆ: 1 ರಿಂದ 4ರ ವರೆಗಿನ ಖಾತೆದಾರರ ಹೆಸರುಗಳ ಬದಲಾಗಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| 6(1)ರ ಅಧಿಸೂಚನೆಯಲ್ಲಿ ಪ್ರಕಟವಾಗಿರುವುದು | | | | | ತಿದ್ದಿಕೊಂಡು ಓದಿಕೊಳ್ಳತಕ್ಕದ್ದು | | | |
|---|---|---|---|---|---|---|---|---|
| **6(1) ಕ್ರ.ಸಂ.** | **ಖಾತೆದಾರರ ಹೆಸರು** | **ಸ.ನಂ.** | **ವಿಸ್ತೀರ್ಣ ಎ–ಗು** | | **6(1) ಕ್ರ.ಸಂ.** | **ಖಾತೆದಾರರ ಹೆಸರು** | **ಸ.ನಂ.** | **ವಿಸ್ತೀರ್ಣ ಎ–ಗು** |
| 1 | ಸಿದ್ದಲಿಂಗಪ್ಪ/ಸಿದ್ದರಾಮಯ್ಯ | 1/1 | 0–02 1/4 | | 1 | ಖಾತೆದಾರರು ಇರುವುದಿಲ್ಲ | – | – |
| 2 | ಶಿವಕುಮಾರಯ್ಯ/ಸಿದ್ದರಾಮಯ್ಯ | 1/1 | 0–02 1/4 | | 2 | ಖಾತೆದಾರರು ಇರುವುದಿಲ್ಲ | – | – |
| 3 | ವೀರಣ್ಣ/ಶಿವಣ್ಣ | 1/1 | 0–04 3/4 | | 3 | ಖಾತೆದಾರರು ಇರುವುದಿಲ್ಲ | – | – |
| 4 | ಸದಾಶಿವಯ್ಯ/ನಂಜುಂಡಪ್ಪ | 1/1 | 0–04 3/4 | | 4 | ಖಾತೆದಾರರು ಇರುವುದಿಲ್ಲ | – | – |
| 5 | ಹೆಚ್.ಎನ್.ಗಂಗಾಧರಯ್ಯ ಬಿನ್ ನಂಜುಂಡಪ್ಪ | 1/1 | 0–01 1/4 | | 5 | ಹೆಚ್.ಎನ್.ಗಂಗಾಧರಯ್ಯ ಬಿನ್ ನಂಜುಂಡಪ್ಪ | 1/1 | 0–01 1/4 |
| | **ಒಟ್ಟು ವಿಸ್ತೀರ್ಣ** | | **0–15 1/4** | | | **ಒಟ್ಟು ವಿಸ್ತೀರ್ಣ** | | **0–01 1/4** |

**PR-114**

**SC-25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹೆಚ್. ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂಸ್ವಾಧೀನ)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59